

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 459
ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಆರ್.ಬಿ ತಿಮ್ಮಾಪೂರ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 18-02-2022
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಶಾಲಾ ಕಾಲೇಜುಗಳಿಗೆ ಪ್ರವೇಶ ಪಡೆಯಲು ಟ್ಯೂಷನ್ ಫೀ ವಿನಾಯಿತಿ ನೀಡಲಾಗಿದೆಯೇ; | ಹೌದು.<br>ಕುಟುಂಬದ ವಾರ್ಷಿಕ ಆದಾಯ ರೂ. 2.50 ಲಕ್ಷಗಳ ಮಿತಿಯೊಳಗಿರುವ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಕೇಂದ್ರ ಪುರಸ್ಕೃತ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮದಡಿ ನಿರ್ವಹಣಾ ವೆಚ್ಚ ಮತ್ತು ಶುಲ್ಕ ಮರುಪಾವತಿ ಮಾಡಲಾಗುತ್ತಿದೆ. ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಮಾರ್ಗಸೂಚಿ (2020-21 ರಿಂದ 2025-26)ರನ್ವಯ 2021-22ನೇ ಸಾಲಿನಲ್ಲಿ FreeShip Card ವ್ಯವಸ್ಥೆಯನ್ನು ಜಾರಿಗೆ ತರಲಾಗಿದ್ದು, ಅರ್ಹ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ FreeShip Card ವಿತರಣೆ ಮಾಡಲಾಗುತ್ತಿದೆ. FreeShip Card ಸೌಲಭ್ಯ ಹೊಂದಿರುವ ಅರ್ಹ ಪರಿಶಿಷ್ಟ ಜಾತಿ ವಿದ್ಯಾರ್ಥಿಯು ಕಾಲೇಜು ದಾಖಲಾತಿ ಸಮಯದಲ್ಲಿ ಸರ್ಕಾರದಿಂದ ಮರುಪಾವತಿಸಲಾಗುವ ಶುಲ್ಕಗಳನ್ನು ಪಾವತಿಸುವಂತಿಲ್ಲ.<br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ಕಾಲೇಜು/ವಿಶ್ವವಿದ್ಯಾಲಯಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಸರ್ಕಾರದಿಂದ ನಿಗಧಿಪಡಿಸಿದ ಟ್ಯೂಷನ್ ಫೀಯನ್ನು ಮಂಜೂರು ಮಾಡಲಾಗುತ್ತಿದೆ. |
| ಆ) | ವಿದ್ಯಾರ್ಥಿಗಳು ಟ್ಯೂಷನ್ ಫೀ ವಿನಾಯಿತಿ ಪಡೆದರೂ ಶುಲ್ಕ ಪಾವತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ.<br>ಈ ಸಂಬಂಧ ದಾಖಲಾತಿ ಸಮಯದಲ್ಲಿ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಂದ ಸರ್ಕಾರದಿಂದ ಮರುಪಾವತಿಸಲಾಗುವ ಶುಲ್ಕಗಳನ್ನು ಪಡೆಯದಂತೆ ಸರ್ಕಾರದಿಂದ ಸುತ್ತೋಲೆ ಹೊರಡಿಸಲಾಗಿದೆ.<br>ಮುಂದುವರೆದು, ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಮಾರ್ಗಸೂಚಿ (2020-21 ರಿಂದ 2025-26)ರನ್ವಯ 2021-22ನೇ ಸಾಲಿನಲ್ಲಿ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮದಡಿ ಮಂಜೂರಾದ ವಿದ್ಯಾರ್ಥಿವೇತನದ ಸಂಪೂರ್ಣ ಮೊತ್ತವನ್ನು ವಿದ್ಯಾರ್ಥಿಯ ಆಧಾರ್ ಜೋಡಿತ ಬ್ಯಾಂಕ್ ಖಾತೆಗೆ ಜಮೆ ಮಾಡಲಾಗುತ್ತಿದೆ. ಜಮೆಯಾದ ನಂತರದಲ್ಲಿ ವಿದ್ಯಾರ್ಥಿವೇತನ ಮೊತ್ತದಲ್ಲಿ ಶುಲ್ಕವನ್ನು ವಿದ್ಯಾರ್ಥಿಯೇ ಸಂಬಂಧಪಟ್ಟ ಕಾಲೇಜಿಗೆ ಪಾವತಿಸಬೇಕಾಗಿದೆ. |

| | | |
|---|---|---|
| | | ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ರಾಜ್ಯದ ಯಾವುದೇ ವಿಶ್ವವಿದ್ಯಾಲಯಗಳಲ್ಲಿ/ಡೀಮ್ಡ್ ವಿಶ್ವವಿದ್ಯಾಲಯ/ಖಾಸಗಿ ವಿಶ್ವವಿದ್ಯಾಲಯ, ಸರ್ಕಾರಿ/ ಅನುದಾನಿತ/ ಅನುದಾನ ರಹಿತ ಶಿಕ್ಷಣ ಸಂಸ್ಥೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಾರ್ಷಿಕ ಆದಾಯ ರೂ.2.50 ಲಕ್ಷಗಳ ಮಿತಿಯೊಳಗಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಅವರ ಪ್ರವೇಶಾತಿ ಸಮಯದಲ್ಲಿ ಕಾಲೇಜು ಶುಲ್ಕಗಳನ್ನು ಪಾವತಿಸುವಂತೆ ಒತ್ತಾಯಿಸಬಾರದೆಂದು ಸುತ್ತೋಲೆಯನ್ನು ಹೊರಡಿಸಲಾಗಿರುತ್ತದೆ. ಮುಂದುವರೆದು ಪ್ರಸಕ್ತ ಸಾಲಿನಿಂದ ವಿದ್ಯಾರ್ಥಿಗಳಿಗೆ FREESHIP CARD ನೀಡಲಾಗುತ್ತಿದೆ. ಸದರಿ FREESHIP CARD ನ್ನು ವಿದ್ಯಾರ್ಥಿಗಳು ದಾಖಲಾತಿ ಸಮಯದಲ್ಲಿ ಕಾಲೇಜಿನ ಮುಖ್ಯಸ್ಥರಿಗೆ ತೋರಿಸಿ ಪ್ರವೇಶ ಪಡೆಯಬಹುದಾಗಿದೆ. |
| ಇ) | ಶುಲ್ಕ ವಿನಾಯಿತಿ ನೀಡದೆ ಶುಲ್ಕ ಪಾವತಿಸಿಕೊಂಡಿರುವ ಶಾಲಾ ಕಾಲೇಜುಗಳ ಬಗ್ಗೆ ದೂರುಗಳು ಬಂದಿವೆಯೇ; ಬಂದಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಸಮಾಜ ಕಲ್ಯಾಣ ಇಲಾಖಾ ವತಿಯಿಂದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ ನೀಡದೆ ಶುಲ್ಕ ಪಾವತಿಸಿಕೊಂಡಿರುವ ಶಾಲಾ ಕಾಲೇಜುಗಳ ಬಗ್ಗೆ ಈವರೆವಿಗೆ ಯಾವುದೇ ದೂರುಗಳು ಸಲ್ಲಿಕೆಯಾಗಿರುವುದಿಲ್ಲ.<br><br>ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ವತಿಯಿಂದ ವಿದ್ಯಾರ್ಥಿಯ ಆಧಾರ್ ಸಂಖ್ಯೆಯನ್ನು ಬ್ಯಾಂಕ್ ಖಾತೆಗೆ ಲಿಂಕ್ ಮಾಡಿ DBT ಮೂಲಕ ವಿದ್ಯಾರ್ಥಿಯ ಖಾತೆಗೆ ನೇರವಾಗಿ ವಿದ್ಯಾರ್ಥಿವೇತನವನ್ನು ಪಾವತಿಸಲಾಗುತ್ತಿದೆ. ಕೆಲವೊಂದು ತಾಂತ್ರಿಕ ಕಾರಣಗಳಿಂದ ವಿದ್ಯಾರ್ಥಿವೇತನ ನೀಡುವಲ್ಲಿ ವಿಳಂಬವಾಗಿದ್ದು, ಇಂತಹ ಸಂದರ್ಭಗಳಲ್ಲಿ ಕೆಲವು ಖಾಸಗಿ ಕಾಲೇಜು/ವಿಶ್ವವಿದ್ಯಾಲಯಗಳು ಹಾಗೂ ಶಿಕ್ಷಣ ಸಂಸ್ಥೆಗಳು ಅರ್ಹರಿರುವ ಪ.ಜಾತಿ/ಪಂಗಡದ ವಿದ್ಯಾರ್ಥಿಗಳಿಂದ ಶುಲ್ಕ ಪಾವತಿಸುವಂತೆ ಒತ್ತಾಯಿಸುತ್ತಿರುವುದು ಕಂಡು ಬಂದ ಕಾರಣ ಪ್ರವೇಶಾತಿ ಸಮಯದಲ್ಲಿ ಕಾಲೇಜು ಶುಲ್ಕಗಳನ್ನು ಪಾವತಿಸುವಂತೆ ಒತ್ತಾಯಿಸಬಾರದೆಂದು ಸುತ್ತೋಲೆಯನ್ನು ಹೊರಡಿಸಲಾಗಿರುತ್ತದೆ. |

ಸಕಇ 132 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.